ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ಗಣಿಗಾರಿಕೆ ನಿಬಂಧನೆ ಉಲ್ಲಂಘನೆ ಕುರಿತು

ಡಾ|| ಜಯಮಾಲ ರಾಮಚಂದ್ರ(ನಾಮನಿರ್ದೇಶನ ಹೊಂದಿದವರು):-

555 (761) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿನ ಸ್ಥಳಗಳಲ್ಲಿ ಎಷ್ಟು ಗ್ರಾನೈಟ್ ಕಟ್ಟಿಂಗ್ ಹಾಗೂ ಕಲ್ಲಿನ ಗಣಿಗಾರಿಕೆ ಘಟಕಗಳಿಗಾಗಿ ಪರವಾನಿಗೆಯನ್ನು ನೀಡಲಾಗಿದೆ ;

(ಆ) ಪರವಾನಿಗೆ ಪಡೆದ ಕೆಲವೊಂದು ಸಂಸ್ಥೆಗಳು ನಿಯಮವನ್ನು ಉಲ್ಲಂಘಿಸಿ ರಾತ್ರಿ ಸಮಯದಲ್ಲಿ ಗಣಿಗಾರಿಕೆ ಮಾಡುತ್ತಿರುವುದು ಹಾಗೂ ಗ್ರಾನೈಟ್ ಕಟ್ಟಿಂಗ್ ಮಾಡುತ್ತಿರುವುದರಿಂದ ದಿನ ನಿತ್ಯ ಶಬ್ದ ಮಾಲಿನ್ಯ ಮತ್ತು ವಾಯು ಮಾಲಿನ್ಯ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಪರವಾನಿಗೆ ಪಡೆದ ಸಂಸ್ಥೆಗಳಿಗೆ ಸರ್ಕಾರದಿಂದ ಯಾವ ಯಾವ ಷರತ್ತುಗಳು ಹಾಗೂ ನಿಬಂಧನೆಗಳನ್ನು ವಿಧಿಸಲಾಗಿರುತ್ತದೆ ;(ಈ) ಷರತ್ತುಗಳು ಹಾಗೂ ನಿಬಂಧನೆಗಳನ್ನು ಗಾಳಿಗೆ ತೂರಿ ಅಕ್ರಮವಾಗಿ ಗಣಿಗಾರಿಕೆ ಹಾಗೂ ಗ್ರಾನೈಟ್ ಕಟ್ಟಿಂಗ್ ಮಾಡುತ್ತಿರುವವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು ; ಕಳೆದ 3 ವರ್ಷಗಳಲ್ಲಿ ನಡೆದಿರುವ ಇಂತಹ ಪ್ರಕರಣಗಳ ಸಂಖ್ಯೆ ಎಷ್ಟು ?